


# ದಿ ಮಿಥಿಕ್ ಸೊಸೈಟಿ ಉದ್ಯೋಗಾವಕಾಶ

## ಶಾಸನಗಳ 3ಡಿ-ಡಿಜಿಟಲ್ ಸಂರಕ್ಷಣಾ ಯೋಜನೆ




# ದಿ ಮಿಥಿಕ್ ಸೊಸೈಟಿ

ಭಾರತೀಯ ಸಾಂಸ್ಕೃತಿಕ ಅಧ್ಯಯನಕ್ಕೆ ಅರ್ಪಿಸಿಕೊಂಡ ಅಭಿಜಾತ ಸಂಸ್ಥೆಗಳ ಪೈಕಿ 'ದಿ ಮಿಥಿಕ್ ಸೊಸೈಟಿ'ಯು ಹೆಮ್ಮೆ ಪಡುವಂಥ ಸ್ಥಾನವನ್ನು ಪಡೆದುಕೊಂಡಿದೆ. 1909ರಲ್ಲಿ ಪ್ರಾರಂಭವಾದ ಸಂಸ್ಥೆಯು ಸತತ 112 ವರ್ಷಗಳಿಂದ ಭಾರತೀಯ ಅಧ್ಯಯನ ಶಾಸ್ತ್ರಗಳಾದ ಇತಿಹಾಸ, ಪುರಾತತ್ವಶಾಸ್ತ್ರ, ಭಾಷಾಶಾಸ್ತ್ರ, ನಾಣ್ಯಶಾಸ್ತ್ರ ಶಾಸನಶಾಸ್ತ್ರ, ಜಾನಪದ, ಪುರಾಣ, ಧರ್ಮ, ಕಲೆ ಮತ್ತು ವಾಸ್ತುಶಿಲ್ಪದ ಕ್ಷೇತ್ರಗಳಲ್ಲಿ ಸಂಶೋಧನೆ, ಪ್ರಚಾರ, ಉಪನ್ಯಾಸ, ಸಂರಕ್ಷಣೆ ಹಾಗೂ ಅವುಗಳ ಮೇಲೆ ಬೆಳಕು ಚೆಲ್ಲುವ ಕೆಲಸವನ್ನು ನಿರಂತರ ಮಾಡುತ್ತಾ ಬರುತ್ತಿದೆ. ಸುಮಾರು 40 ಸಾವಿರಕ್ಕೂ ಹೆಚ್ಚು ಪುಸ್ತಕ ಸಂಗ್ರಹವಿರುವ ಗ್ರಂಥಾಲಯವು ಆಸಕ್ತರು ಮತ್ತು ಸಂಶೋಧಕರಿಗೆ ವರದಾನವಾಗಿದೆ. ಬಿ.ಎಲ್.ರೈಸ್, ಸಿ.ವಿ.ರಾಮನ್, ಆರ್.ಶಾಮಶಾಸ್ತ್ರಿ, ಮಿರ್ಜಾ ಇಸ್ಮಾಯಿಲ್, ಎಸ್.ಆರ್.ರಾವ್, ಎಸ್.ಶ್ರೀಕಂಠಯ್ಯ, ಆರ್.ನರಸಿಂಹಾಚಾರ್, ಸಿ.ಹಯವದನ ರಾವ್, ಎಂ.ವಿಶ್ವೇಶ್ವರಯ್ಯ ಮತ್ತು ಇತರರು ಸಂಸ್ಥೆಯ ಸುದೀರ್ಘ ಮತ್ತು ಶ್ರೀಮಂತ ಇತಿಹಾಸದೊಂದಿಗೆ ಸಂಬಂಧವನ್ನು ಹೊಂದಿದ್ದರು.

# ಶಾಸನಗಳ 3ಡಿ ಡಿಜಿಟಲ್ ಸಂರಕ್ಷಣಾ ಯೋಜನೆ

ಇತಿಹಾಸವನ್ನು ಅರಿಯಲು ಹಾಗೂ ಅಧ್ಯಯನ ಮಾಡಲು ಶಾಸನಗಳು ಅತ್ಯಮೂಲ್ಯವಾದ ಮಾಹಿತಿಯ ಕಣಜಗಳಾಗಿವೆ. ಆದರೆ ಸಾಮಾನ್ಯ ಜನರಿಗೆ ಅವುಗಳ ಮೌಲ್ಯ ಹಾಗೂ ಮಹತ್ವದ ಬಗ್ಗೆ ಹೆಚ್ಚಿನ ಅರಿವು ಇರುವುದಿಲ್ಲ. ಈ ತಿಳುವಳಿಕೆಯ ಕೊರತೆ ಹಾಗೂ ತೀವ್ರಗತಿಯ ನಗರೀಕರಣದ ಪ್ರಭಾವವು ಅಮೂಲ್ಯವಾದ ಶಾಸನ ಪರಂಪರೆಯ ವಿನಾಶಕ್ಕೆ ಕಾರಣವಾಗಿದೆ. ಆದ್ದರಿಂದ ದಿ ಮಿಥಿಕ್ ಸೊಸೈಟಿಯ 3ಡಿ ಶಾಸನಗಳ ಯೋಜನಾ ತಂಡವು ನಮ್ಮ ಪರಂಪರೆಯ ಭಾಗವಾಗಿರುವ ಈ **ಶಾಸನಗಳನ್ನು ಶಾಶ್ವತವಾಗಿ ಡಿಜಿಟಲ್ ರೂಪದಲ್ಲಿ ಸಂರಕ್ಷಿಸುವ ಮೂಲ ಉದ್ದೇಶವನ್ನು ಹೊಂದಿದೆ**.

ಜಗತ್ತು ಇಂದು ಹೊಸ ಹೊಸ ವೈಜ್ಞಾನಿಕ ಆವಿಷ್ಕಾರಗಳಿಗೆ ತೆರೆದುಕೊಂಡಿದ್ದು, ಈ ಮೂಲಕ ವಿವಿಧ ಕ್ಷೇತ್ರಗಳಲ್ಲಿ ಹೊಸ ಹೊಸ ವಿಧಾನಗಳನ್ನು ಅಳವಡಿಸಿಕೊಳ್ಳಲಾಗುತ್ತಿದೆ. ಅದೇ ರೀತಿ ದಿ ಮಿಥಿಕ್ ಸೊಸೈಟಿಯು **ಪ್ರಪಂಚದಲ್ಲಿಯೇ ಮೊಟ್ಟ ಮೊದಲ ಬಾರಿಗೆ ಶಾಸನ ಕ್ಷೇತ್ರದಲ್ಲಿ 3D ಡಿಜಿಟಲ್ ಸ್ಕ್ಯಾನಿಂಗ್ ಎಂಬ ವೈಜ್ಞಾನಿಕ ವಿಧಾನ**ವನ್ನು ಬಳಸಿಕೊಂಡು ಅವಿಭಜಿತ ಬೆಂಗಳೂರು ಜಿಲ್ಲೆಯ ಅಂದರೆ ಬೆಂಗಳೂರು ನಗರ, ಗ್ರಾಮಾಂತರ ಹಾಗೂ ರಾಮನಗರ ಜಿಲ್ಲೆಯ ಶಾಸನಗಳನ್ನು ಸಂರಕ್ಷಿಸುವ ಒಂದು ಮಹತ್ವಾಕಾಂಕ್ಷಿ ಯೋಜನೆಯನ್ನು ಕೈಗೊಂಡಿರುತ್ತದೆ. ಈ ಯೋಜನೆಯಲ್ಲಿ ಶಾಸನಗಳನ್ನು 3D ಸ್ಕ್ಯಾನಿಂಗ್ ಮೂಲಕ ಡಿಜಿಟಲ್ ಸಂರಕ್ಷಣೆ ಮಾಡುವುದು ಮಾತ್ರವಲ್ಲದೇ, ಈ ಶಾಸನಗಳು ಹಾಗೂ ಇನ್ನಿತರ ನಿಖರ ಆಧಾರಗಳನ್ನು ಬಳಸಿಕೊಂಡು ಬೆಂಗಳೂರಿನ ಬಡಾವಣೆಗಳು ಮತ್ತು ಹಳ್ಳಿಗಳ **ಸ್ಥಳೀಯ ಇತಿಹಾಸವನ್ನು ರಚಿಸುವ ಕಾರ್ಯ**ವನ್ನು ಮಾಡಲಾಗುತ್ತಿದೆ. ಜೊತೆಗೆ ಶಾಸನಗಳಲ್ಲಿನ ಮಾಹಿತಿಯ ಪ್ರಚಾರ ಹಾಗೂ ಅವಸಾನದ ಅಂಚಿನಲ್ಲಿರುವ ಶಾಸನಗಳ ಭೌತಿಕ ಸಂರಕ್ಷಣೆಯ ಕಾರ್ಯವನ್ನೂ ಮಾಡಲಾಗುತ್ತಿದೆ.

ಈ ಯೋಜನೆಯಲ್ಲಿ ಈಗಾಗಲೇ ಬೆಂಗಳೂರು ನಗರದ ಸುಮಾರು **200ಕ್ಕೂ ಹೆಚ್ಚು ಶಿಲಾ ಶಾಸನಗಳ ಡಿಜಿಟಲ್ ಸಂರಕ್ಷಣಾ ಕಾರ್ಯ ಮುಗಿದಿರುತ್ತದೆ ಹಾಗೂ ಬೆಂಗಳೂರು ಪ್ರದೇಶದ 500ಕ್ಕೂ ಹೆಚ್ಚು ಶಾಸನಗಳನ್ನು ಕ್ಷೇತ್ರಕಾರ್ಯ** ಮಾಡುವ ಮೂಲಕ ದಾಖಲಿಸಲಾಗಿದೆ. ಕ್ಷೇತ್ರಕಾರ್ಯವನ್ನು ಮುಗಿಸಿದ ನಂತರ ಶಾಸನಗಳನ್ನು ಮರು ಓದುವ ಮೂಲಕ, ಶಾಸನದ ಹೊಸ ಪಾಠ ಹಾಗೂ ಶಾಸನದ ಸ್ಥಿತಿಗತಿಗಳನ್ನು ತಿಳಿಸುವ ಛಾಯಾಚಿತ್ರಗಳನ್ನು **ಗೂಗಲ್ ಮ್ಯಾಪ್ ನಲ್ಲಿ ಅಳವಡಿಸಲಾಗಿದೆ**. ಈ ಗೂಗಲ್ ಮ್ಯಾಪ್‌ನಲ್ಲಿನ ಮಾಹಿತಿಯನ್ನು ಯಾರು ಬೇಕಾದರೂ ಮುಕ್ತವಾಗಿ ನೋಡಬಹುದಾಗಿದ್ದು ಇದುವರೆಗೂ ನಮ್ಮ **ಗೂಗಲ್ ಮ್ಯಾಪ್ 150,000ಕ್ಕೂ ಹೆಚ್ಚು ಬಾರಿ ವೀಕ್ಷಿಸಲ್ಪಟ್ಟಿದೆ**. (http://bit.ly/inscriptionblr)

ಪ್ರಸ್ತುತ ವರ್ಷದಲ್ಲಿ ಸುಮಾರು 1000 ಶಾಸನಗಳನ್ನು ಡಿಜಿಟಲ್ ಸಂರಕ್ಷಣೆ ಮಾಡುವ ಗುರಿಯನ್ನು ಹೊಂದಲಾಗಿದೆ. 3D ಮಾಡಲ್‌ಗಳು ಹಾಗೂ ಇನ್ನಿತರ ನಂಬಲರ್ಹ ಆಧಾರಗಳನ್ನು ಬಳಸಿಕೊಂಡು ದಿ ಮಿಥಿಕ್ ಸೊಸೈಟಿಯು **ಬೆಂಗಳೂರು ಇತಿಹಾಸ ವೈಭವ** ಮಾಲಿಕೆ ಎಂಬ ಪುಸ್ತಕವನ್ನು ಹೊರತಂದಿದ್ದು ಈ ಮಾಲಿಕೆಯಲ್ಲಿ "**ಸಿಂಗಾಪುರ**" ಮತ್ತು "**ಜಕ್ಕೂರು, ಅಲ್ಲಾಳಸಂದ್ರ, ಅಗ್ರಹಾರ, ದಾಸರಹಳ್ಳಿ**" ಎಂಬ ಎರಡು ಸಂಚಿಕೆಗಳು ಪ್ರಕಟವಾಗಿರುತ್ತವೆ. ಈ ಎರಡು ಸಂಚಿಕೆಗಳ e-book ನ ಲಿಂಕ್ ಅನ್ನು ಈ ಕೆಳಕಂಡಂತೆ ನೀಡಲಾಗಿದೆ.

1. https://bit.ly/Bengaluru_Itihaasa_Vaibhava_Singapura
2. https://bit.ly/Bengaluru_Itihaasa_Vaibhava_Singapura_English
3. https://bit.ly/BIV_Dec21_Jakkur_Kannada

ನಮ್ಮ ಈ 3D ಯೋಜನೆಯ ಕಾರ್ಯವೈಖರಿಯ ಬಗ್ಗೆ ದೃಶ್ಯ ಹಾಗೂ ಮುದ್ರಣ ಮಾಧ್ಯಮಗಳಲ್ಲಿಯೂ ಆಗಿಂದಾಗ್ಗೆ ವರದಿಗಳು ಭಿತ್ತರವಾಗುತ್ತಿದ್ದು, ಇವುಗಳ ಬಗ್ಗೆ ಪುಟ ಸಂಖ್ಯೆ 10ರಲ್ಲಿ ನೋಡಬಹುದು. ದಿನಗಳು ಕಳೆದಂತೆ ಈ ಯೋಜನೆಯು ಅಪಾರ ಜನಮನ್ನಣೆಯನ್ನು ಪಡೆಯುತ್ತಿದ್ದು, ಇದಕ್ಕೆ ಪೂರಕವಾಗಿ **ಮಿಥಿಕ್ ಸೊಸೈಟಿಯು ತನ್ನ ಯೋಜನಾ ತಂಡವನ್ನು ವಿಸ್ತರಿಸಲು ಇಚ್ಚಿಸಿರುತ್ತದೆ**. ಆದ್ದರಿಂದ ಆಸಕ್ತ ಅರ್ಹ ಅಭ್ಯರ್ಥಿಗಳಿಂದ ಅರ್ಜಿಯನ್ನು ಆಹ್ವಾನಿಸುತ್ತಿದ್ದು, ಮೂರು ವರ್ಷಗಳ ಈ ಯೋಜನೆಗೆ (ವಿಸ್ತರಣೆಯಾಗಲೂ ಬಹುದು) ಆಯ್ಕೆಯಾಗುವ ಅಭ್ಯರ್ಥಿಗಳು ಸಂಪೂರ್ಣವಾಗಿ ಗುತ್ತಿಗೆ ಆಧಾರದಲ್ಲಿ ಕಾರ್ಯನಿರ್ವಹಿಸಬೇಕಾಗುತ್ತದೆ.

# ಅರ್ಜಿದಾರರ ಅರ್ಹತೆಗಳು

## ತಂಡದ ಸದಸ್ಯರ ಕರ್ತವ್ಯ ಹಾಗೂ ಜವಾಬ್ದಾರಿಗಳು

1. ತಂಡದ ಸದಸ್ಯರು ನಮ್ಮ ಯೋಜನೆಯ ನಿರ್ಧರಿತ ಭೌಗೋಳಿಕ ಪರಿಮಿತಿಯೊಳಗೆ **ಕ್ಷೇತ್ರಕಾರ್ಯ**ವನ್ನು ಮಾಡಬೇಕು.
2. ಕ್ಷೇತ್ರ ಕಾರ್ಯದಲ್ಲಿ ದಾಖಲು ಮಾಡಿದ ಶಾಸನಗಳ **3D ಸ್ಕ್ಯಾನಿಂಗ್** ಮಾಡಬೇಕು.
3. ಸ್ಕ್ಯಾನಿಂಗ್ ಮಾಡಿದ ಶಾಸನಗಳನ್ನು ಬಳಸಿಕೊಂಡು ಕಛೇರಿಯಲ್ಲಿ **3D ಮಾಡಲ್‌ಗಳನ್ನು** ಮಾಡಬೇಕು.
4. 3D ಮಾಡಲ್‌ಗಳನ್ನು ಬಳಸಿಕೊಂಡು **ಶಾಸನಗಳ ಪಾಠ**ವನ್ನು ಓದಬೇಕು.
5. ಶಾಸನಗಳ ಪಾಠ ಮತ್ತು ಇನ್ನಿತರ ನಿಖರ ಮಾಹಿತಿಯನ್ನು ಬಳಸಿಕೊಂಡು ಮಿಥಿಕ್ ಸೊಸೈಟಿಯ ಪ್ರತಿಷ್ಠಿತ "ಬೆಂಗಳೂರು ಇತಿಹಾಸ ವೈಭವ ಮಾಲಿಕೆ" ಎಂಬ **ಪುಸ್ತಕದ ಸಂಚಿಕೆಗಳನ್ನು ಹೊರತರುವ**ಲ್ಲಿ ಕಾರ್ಯ ನಿರ್ವಹಿಸಬೇಕು.

ಈ ಮೇಲೆ ತಿಳಿಸಿದ ಕಾರ್ಯಗಳನ್ನು ಮಾಡಲು ಹಾಗೂ ಉಪಕರಣಗಳನ್ನು ಬಳಸಲು ಸದಸ್ಯರಿಗೆ ಸೂಕ್ತ ತರಭೇತಿ ಮತ್ತು ಮಾರ್ಗದರ್ಶನವನ್ನು ನೀಡಲಾಗುವುದು.

## ವಿದ್ಯಾರ್ಹತೆ

**ಪಿಹೆಚ್.ಡಿ** ಅಥವಾ **ಎಂ.ಎ** ಪದವಿ (ಇತಿಹಾಸ, ಪುರಾತತ್ವ, ಕನ್ನಡ ಹಾಗೂ ಶಾಸನಶಾಸ್ತ್ರ) ಅಥವಾ ಇತಿಹಾಸ ಮತ್ತು ಶಾಸನ ಕ್ಷೇತ್ರದಲ್ಲಿ ಆಸಕ್ತಿ ಇರುವ **ಎಂಜಿನಿಯರ್** ಪದವೀಧರರು ಅರ್ಜಿ ಸಲ್ಲಿಸಬಹುದು.

## ಜ್ಞಾನ ಮತ್ತು ಕೌಶಲ್ಯಗಳು

1. ಕನ್ನಡ **ಶಾಸನಗಳನ್ನು ಓದುವ ಹಾಗೂ ಗ್ರಹಿಸುವ** ಸಾಮರ್ಥ್ಯವಿರಬೇಕು. ಜೊತೆಗೆ ಗ್ರಂಥ-ತಮಿಳು ಶಾಸನಗಳನ್ನು ಓದುವ ಕೌಶಲ್ಯ ಹೊಂದಿರುವವರಿಗೆ ಪ್ರಾಧಾನ್ಯತೆ ಇರುತ್ತದೆ.
2. ಬೆಂಗಳೂರು ನಗರ, ಗ್ರಾಮಾಂತರ ಹಾಗೂ ರಾಮನಗರ ಜಿಲ್ಲೆಯ **ಭೌಗೋಳಿಕ ಪರಿಸರದ ಪರಿಚಯ**ವಿರಬೇಕು.
3. **ಕಂಪ್ಯೂಟರ್ ಬಗ್ಗೆ ಸಾಮಾನ್ಯ ಜ್ಞಾನ**ವನ್ನು ಅಂದರೆ Microsoft Windows, Word, Excel, PowerPoint, Google Docs & Sheets, Wiki-article editing ಬಗ್ಗೆ ಕಡ್ಡಾಯವಾಗಿ ಜ್ಞಾನ ಹೊಂದಿರಬೇಕು. ಜೊತೆಗೆ Adobe Photoshop, InDesign, Illustrator ಬಗ್ಗೆ ಅನುಭವ ಇರುವವರಿಗೆ ಪ್ರಾಮುಖ್ಯತೆ ನೀಡಲಾಗುವುದು.
4. ಇತಿಹಾಸ, ಭಾಷೆ ಮತ್ತು ಶಾಸನ ಕ್ಷೇತ್ರಕ್ಕೆ ಸಂಬಂಧಿಸಿದಂತೆ **ತಂತ್ರಜ್ಞಾನವನ್ನು ಅನ್ವಯಿಸುವ ಆಸಕ್ತಿ ಮತ್ತು ಕೌಶಲ್ಯ**ವಿರಬೇಕು.
5. ಯೋಜನೆಗೆ ಸಂಬಂಧಿಸಿದಂತೆ **ಅಧಿಕಾರಿಗಳು ಹಾಗೂ ಸ್ಥಳೀಯರೊಂದಿಗೆ ಸಂಪರ್ಕ ಸಂವಹನ ಮಾಡುವ ಕೌಶಲ್ಯ**ವಿರಬೇಕು.
6. **ದ್ವಿಚಕ್ರ ವಾಹನ** (Scooter/Motorbike) ಮತ್ತು **ಸ್ಮಾರ್ಟ್ ಫೋನ್** ಕಡ್ಡಾಯವಾಗಿ ಹೊಂದಿರಬೇಕು. ಸಂಸ್ಥೆಯ ಕೇಂದ್ರಸ್ಥಾನದಿಂದ ನಮ್ಮ ಯೋಜನೆಯ ವ್ಯಾಪ್ತಿಯ ಯಾವುದೇ ದೂರದ ಊರುಗಳಿಗೆ ಸ್ವತಃ ವಾಹನ ಚಲಾಯಿಸಿಕೊಂಡು ಹೋಗಿ ಕಾರ್ಯವನ್ನು ಮಾಡಬೇಕು. ಈ ಯೋಜನೆಯ ಕಾರ್ಯಗಳಿಗೆ ಸಂಬಂಧಿಸಿದಂತೆ ಮಾಡುವ ಪ್ರಯಾಣ, ಮೊಬೈಲ್ ರೀಚಾರ್ಜ್ ಖರ್ಚನ್ನು ಭರಿಸಲಾಗುವುದು.
7. ಯೋಜನೆಗೆ ಆಯ್ಕೆಯಾದಲ್ಲಿ ಬೆಂಗಳೂರಿನಲ್ಲಿ ಅಥವಾ ನಗರಕ್ಕೆ ಹೊಂದಿಕೊಂಡಂತೆ ಆಸು ಪಾಸಿನಲ್ಲೇ ವಾಸವಿರಬೇಕು.

## ಅರ್ಜಿಯೊಂದಿಗೆ ಲಗತ್ತಿಸಬೇಕಾದ ದಾಖಲೆಗಳು

ಬಹು ಮಹತ್ವಾಕಾಂಕ್ಷೆಯ ಈ ಯೋಜನೆಗೆ ಆಯ್ಕೆಯಾಗಲು, ಆಸಕ್ತಿಯುಳ್ಳ ಅರ್ಹ ಅಭ್ಯರ್ಥಿಗಳು ತಮ್ಮ ಅರ್ಜಿಯನ್ನು **10-ಏಪ್ರಿಲ್-2022ರೊಳಗೆ** ಈ ಮುಂದೆ ನೀಡಿರುವ shasana.mythicsociety@gmail.com ಗೆ ಸಲ್ಲಿಸಬೇಕು. **ಅರ್ಜಿಯೊಂದಿಗೆ ಲಗತ್ತಿಸಬೇಕಾದ ದಾಖಲೆಗಳು**:

1. **ಸ್ವವಿವರಗಳು** (Resume) ಹಾಗೂ **ನಿರೀಕ್ಷಿತ ವೇತನ**ದ ಬಗ್ಗೆ ತಿಳಿಸಬೇಕು.
2. ಅರ್ಜಿದಾರರು ತಮ್ಮ ವಿದ್ಯಾಭ್ಯಾಸ ಹಾಗೂ ಸಂಶೋಧನೆಗೆ ಸಂಬಂಧಿಸಿದಂತೆ ವಿದ್ವಾಂಸರು ಅಥವಾ ವಿಭಾಗದ ಮುಖ್ಯಸ್ಥರು ಅಥವಾ ಪ್ರಾಧ್ಯಾಪಕರಿಂದ **ಶಿಫಾರಸ್ಸು ಪತ್ರ**ವನ್ನು ಪಡೆದಿರಬೇಕು.
3. ಅರ್ಜಿದಾರರು ಇತಿಹಾಸ ಅಥವಾ ಪುರಾತತ್ವ ಅಥವಾ ಶಾಸನಶಾಸ್ತ್ರ ಅಥವಾ ಕಲೆ ಮತ್ತು ವಾಸ್ತುಶಿಲ್ಪಕ್ಕೆ ಸಂಬಂಧಿಸಿದಂತೆ 1000ದಿಂದ 2000 ಪದಗಳ ಮಿತಿಯೊಳಗೆ ಒಂದು **ಸ್ವರಚಿತ ಲೇಖನ**ವನ್ನು ಕಳಿಸಿಕೊಡಬೇಕು.




ದಿ ಮಿಥಿಕ್ ಸೊಸೈಟಿಯ 3D ಡಿಜಿಟಲ್ ಸಂರಕ್ಷಣಾ ಯೋಜನೆಯ ಲ್ಯಾಬ್



ಬೇಗೂರಿನ ಸಾ.ಶ. ೯೦೦ರ ನಾಗತ್ತರನ ವೀರಗಲ್ಲು ಶಾಸನದ 3ಡಿ ಡಿಜಿಟಲ್ ಚಿತ್ರ



ಎರೆಯಪ ಮಂಗಲದ ಸಾ.ಶ. 850ರ ಸಂಬಯ್ಯನ ವೀರಗಲ್ಲು ಶಾಸನದ 3ಡಿ ಡಿಜಿಟಲ್ ಚಿತ್ರ







ದಿ ಮಿಥಿಕ್ ಸೊಸೈಟಿಯ ಶಾಸನಗಳ ಡಿಜಿಟಲ್ ಸಂರಕ್ಷಣಾ ಯೋಜನೆಯ ತಂಡವು ಶಾಸನಗಳನ್ನು 3ಡಿ ಸ್ಕ್ಯಾನ್ ಮಾಡುತ್ತಿರುವುದು

ದಿ ಮಿಥಿಕ್ ಸೊಸೈಟಿಯ ಶಾಸನಗಳ ಡಿಜಿಟಲ್ ಸಂರಕ್ಷಣಾ ಯೋಜನೆಯ ತಂಡವು ಶಾಸನಗಳನ್ನು ಭೌತಿಕ ಸಂರಕ್ಷಣೆಯನ್ನು ಮಾಡುತ್ತಿರುವುದು

| ಯೋಜನೆಯನ್ನು ಕುರಿತು ಮಾಧ್ಯಮಗಳಲ್ಲಿನ ವರದಿಗಳು | |
|---|---|
| **Deccan Herald :** A unique project to trace Bengaluru's history before Kempe Gowda | https://www.deccanherald.com/city/a-unique-project-to-trace-bengalurus-history-before-kempe-gowda-973007.html |
| **The Times of India:** Mythic Society to preserve 175 city inscriptions in 3D | https://timesofindia.indiatimes.com/city/bengaluru/mythic-society-to-preserve-175-city-inscriptions-in-3d/articleshow/87955873.cms |
| **The Frontline Magazine :** Rerecording history: Bengaluru's Inscriptions 3D Digital Conservation Project helps preserve millenia-old stone inscriptions | https://frontline.thehindu.com/the-nation/rerecording-history-bengaluru-based-inscriptions-3d-digital-conservation-project-helps-preserve-millenia-old-stone-inscriptions/article38445335.ece<br>PDF : |
| **Bangalore Mirror:** 500 years of history unearthed, demystified | https://bangaloremirror.indiatimes.com/bangalore/others/500-years-of-history-unearthed-demystified/articleshow/88377865.cms |
| **Bangalore Mirror:** History's codebreakers | https://bangaloremirror.indiatimes.com/bangalore/others/historys-codebreakers/articleshow/88131445.cms |
| **ಹೊಸದಿಗಂತ:** ಅಳಿಯುತ್ತಿರುವ ಶಾಸನಗಳಿಗೆ ಡಿಜಿಟಲ್ ರಕ್ಷೆ, ಇದು ಮಿಥಿಕ್ ಸೊಸೈಟಿ ಮಹಾಕಾರ್ಯ! | https://hosadigantha.com/mythic-society-digitising-3d-scanning-edicts-bengaluru-history/ |
| **ವಿಜಯವಾಣಿ:** ಮಿಥಿಕ್ ಸೊಸೈಟಿಯಿಂದ ಡಿಜಿಟಲೀಕರಣ \| ಸ್ಥಳೀಯ ಪ್ರದೇಶಗಳ ಇತಿಹಾಸದ ಬಗ್ಗೆ ಮಾಹಿತಿ ಶಾಸನಗಳ 3 ಡಿ ಸಂರಕ್ಷಣೆ ಆರಂಭ | https://epapervijayavani.in/ArticlePage/APpage.php?edn=Bengaluru&articleid=VVAANINEW_BEN_20211127_12_6 |
| **ಕನ್ನಡಪ್ರಭ:** ನಗರದ 175 ಶಿಲಾಶಾಸನಕ್ಕೆ ಡಿಜಿಟಲ್ ರೂಪ ದೇಶದಲ್ಲೇ ಮೊದಲ ಬಾರಿ 3 ಡಿ ಸ್ಕ್ಯಾನ್ ಬಳಸಿ ಶಿಲಾಶಾಸನಗಳ ಸಂರಕ್ಷಣೆ : ನಾಗರಾಜ್ | https://kpepaper.asianetnews.com/3301343/Bengaluru/Bengaluru%23page/2/2%23page/2/1#page/2/1 |
| **ಕನ್ನಡಪ್ರಭ:** ಶಾಸನಗಳ 3ಡಿ ಡಿಜಿಟಲ್ ಸಂರಕ್ಷಣೆ ಮೂಲಕ ಇತಿಹಾಸ ಉಳಿಸುವ ಪ್ರಯತ್ನ: 'ಬೆಂಗಳೂರು ಇತಿಹಾಸ ವೈಭವ'ದ ಮೊದಲನೇ ಸಂಚಿಕೆಯ ಇ- ಕಾಪಿ ಬಿಡುಗಡೆ | https://www.kannadaprabha.com/specials/2021/nov/28/the-mythic-society-of-bengaluru-brings-out-first-e-copy-of-magazine-bengaluru-ithihaasa-vaibhava-459122.html |
| **Mythic Society BBMP Endowment Lecture:** Digital Conservation of Bengaluru Inscriptions | https://youtu.be/MEzgWe8-V1g |
| **Mythic Society Lecture:** A Novel Approach for Inscription Studies & Conservation - High Resolution 3D Digital Epigraphy | https://youtu.be/2EZEPp3dp9g |
| **ಹೊಸದಿಗಂತ:** ಇತಿಹಾಸವನ್ನು ಅಳಿಸದಂತಿಡುತ್ತೇವೆ ಅಂತ ಕೋಟಿ ರುಪಾಯಿ ಖರ್ಚು ಮಾಡಿ ಮಹಾಯತ್ನಕ್ಕೆ ಕೈಹಾಕಿದೆ ಮಿಥಿಕ್ ಸೊಸೈಟಿ. | https://youtu.be/PEwsy4UWIvU |

## ಮಿಥಿಕ್ ಸೊಸೈಟಿಯಿಂದ ಡಿಜಿಟಲೀಕರಣ | ಸ್ಥಳೀಯ ಪ್ರದೇಶಗಳ ಇತಿಹಾಸದ ಬಗ್ಗೆ ಮಾಹಿತಿ

# ಶಾಸನಗಳ 3ಡಿ ಸಂರಕ್ಷಣೆ ಆರಂಭ

■ ವಿಜಯವಾಣಿ ಸುದ್ದಿಜಾಲ ಬೆಂಗಳೂರು

ಸ್ಥಳೀಯ ಪ್ರದೇಶಗಳ ಬಗ್ಗೆ ಭವ್ಯ ಇತಿಹಾಸವನ್ನು ತಿಳಿಸುವ ಹಾಗೂ ಶಾಸನಗಳನ್ನು ಸಂರಕ್ಷಿಸುವ ಉದ್ದೇಶದಿಂದ ಮಿಥಿಕ್ ಸೊಸೈಟಿ 'ಶಾಸನಗಳ 3ಡಿ ಡಿಜಿಟಲ್ ಸಂರಕ್ಷಣಾ ಯೋಜನೆ' ಆರಂಭಿಸಿದೆ.

ರಾಜ್ಯ ಪುರಾತತ್ವ ಇಲಾಖೆ ಅನುಮತಿ ಪಡೆದು ಶಾಸನಗಳನ್ನು ಸಂರಕ್ಷಿಸಿ ಅವುಗಳ ಅಧ್ಯಯನ ಕಾರ್ಯ ಮಾಡಲಾಗುತ್ತಿದೆ. ಈಗಾಗಲೇ ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ ಮತ್ತು ರಾಮನಗರ ಜಿಲ್ಲೆಗಳಲ್ಲಿ ಅಂದಾಜು 1,500 ಶಾಸನಗಳನ್ನು ಸಂರಕ್ಷಣೆ ಮಾಡಿ ಡಿಜಿಟಲೀಕರಣ ಮಾಡಲಾಗುತ್ತಿದೆ. ಪ್ರತಿ ಶಾಸನ ಸ್ಥಳೀಯ ಪ್ರದೇಶಗಳ ಬಗ್ಗೆ ಇತಿಹಾಸವನ್ನು ತಿಳಿಸಲಿವೆ ಎಂದು ಮಿಥಿಕ್ ಸೊಸೈಟಿ ಕಾರ್ಯದರ್ಶಿ ವಿ. ನಾಗರಾಜ್ ಶುಕ್ರವಾರ ಮಾಹಿತಿ ನೀಡಿದರು.

» **1,500 ಶಾಸನಗಳ ಸಂರಕ್ಷಣೆ**

**ರಾಜ್ಯಾದ್ಯಂತ ಅಧ್ಯಯನ:** ಸ್ಥಳೀಯ ಚರಿತ್ರೆಗಳ ಬಗ್ಗೆ ಶಾಸನಗಳು ಅಮೂಲ್ಯ ಮಾಹಿತಿ ನೀಡಲಿವೆ. ಆದರೆ, ಜನರಿಗೆ ಇದರ ಮೌಲ್ಯ ಮತ್ತು ಮಹತ್ವದ ಬಗ್ಗೆ ತಿಳಿದಿಲ್ಲ. ಹಾಗಾಗಿ ಇದರ ಬಗ್ಗೆ ಜನರಿಗೆ ಅರಿವು ಮೂಡಿಸುವ ಕೆಲಸ ಮಾಡಲಾಗುತ್ತಿದೆ. ನಗರೀಕರಣ ಸೇರಿ ಇನ್ನಿತರ ಕಾರಣಗಳಿಂದ ಶೇ. 40 ಶಿಲಾಶಾಸನಗಳು ನಾಶವಾಗಿವೆ. ಪ್ರಾಥಮಿಕ ಹಂತವಾಗಿ ಬೆಂಗಳೂರು ನಗರ, ಬೆಂ.ಗ್ರಾಮಾಂತರ ಮತ್ತು ರಾಮನಗರ ಜಿಲ್ಲೆಗಳಲ್ಲಿನ ಶಾಸನಗಳ ಅಧ್ಯಯನ ನಡೆಸಿ ಸಂರಕ್ಷಿಸಲಾಗುತ್ತಿದೆ. ಮುಂದಿನ ದಿನಗಳಲ್ಲಿ ರಾಜ್ಯಾದ್ಯಂತ ಅಧ್ಯಯನ ನಡೆಸಲಾಗುವುದು ಎಂದರು.

**175 ಶಾಸನ ಸಂರಕ್ಷಣೆ:** ಬೆಂಗಳೂರು ಇತಿಹಾಸದ ಮಾಹಿತಿ ಹಾಳಾಗುವುದನ್ನು ತಪ್ಪಿಸಲು ಮಿಥಿಕ್ ಸೊಸೈಟಿ, ಆಧುನಿಕ ತಂತ್ರಜ್ಞಾನದ ಮೂಲಕ ಶಾಶ್ವತವಾಗಿ ರಕ್ಷಣೆಗೆ ಮುಂದಾಗಿದೆ. 18ನೇ ಶತಮಾನದವರೆಗೆ ಅಂದಾಜು 175 ಶಾಸನಗಳನ್ನು ಸಂರಕ್ಷಿಸಿ ಡಿಜಿಟಲೀಕರಣ ಮಾಡಲಾಗಿದೆ. ಕೆಲ ಶಾಸನ ಬಡಾವಣೆಗಳ ಚರಿತ್ರೆ ಹೇಳುತ್ತವೆ. ಮರು ಓದುವಿಕೆ ಮತ್ತು ಅಧ್ಯಯನಕ್ಕೂ ಸಹಾಯವಾಗಲಿದೆ. ಸ್ಥಳೀಯ ಇತಿಹಾಸವನ್ನು ಜನರಿಗೆ ತಿಳಿಸದಿದ್ದರೆ ದೊಡ್ಡ ತಪ್ಪು ಮಾಡಿದಂತೆ. ಆದ್ದರಿಂದ, ಇದನ್ನು ಕೈಗೆತ್ತಿಕೊಳ್ಳಲಾಗಿದೆ ಎಂದು ಯೋಜನಾ ನಿರ್ದೇಶಕ ಪಿ.ಎಲ್. ಉದಯಕುಮಾರ್ ಹೇಳಿದರು.



ವಿಜಯವಾಣಿ ಚಿತ್ರ

ಶಾಸನಗಳ 3ಡಿ ಡಿಜಿಟಲ್ ಸಂರಕ್ಷಣಾ ಯೋಜನೆ ಬಗ್ಗೆ ಮಿಥಿಕ್ ಸೊಸೈಟಿ ಕಾರ್ಯದರ್ಶಿ ವಿ. ನಾಗರಾಜ್ ಯೋಜನಾ ನಿರ್ದೇಶಕ ಪಿ.ಎಲ್. ಉದಯಕುಮಾರ್ ಶುಕ್ರವಾರ ಮಾಹಿತಿ ನೀಡಿದರು.

**ಮಿಥಿಕ್ ಸೊಸೈಟಿ**

ಭಾರತೀಯ ಸಂಸ್ಕೃತಿ ಬಗ್ಗೆ ನಿರಂತರವಾಗಿ ಅಧ್ಯಯನದಲ್ಲಿ ತೊಡಗಿರುವ ಮಿಥಿಕ್ ಸೊಸೈಟಿ 1909ರಲ್ಲಿ ಆರಂಭವಾಗಿದ್ದು, 112 ವರ್ಷ ಪೂರೈಸಿದೆ. ಭಾರತೀಯ ಅಧ್ಯಯನ ಶಾಸ್ತ್ರಗಳಾದ ಇತಿಹಾಸ, ಪುರಾತತ್ವ ಶಾಸ್ತ್ರ, ಭಾಷಾಶಾಸ್ತ್ರ, ನಾಣ್ಯಶಾಸ್ತ್ರ, ಶಾಸನಶಾಸ್ತ್ರ, ಜಾನಪದ, ಪುರಾಣ, ಧರ್ಮ, ಕಲೆ ಮತ್ತು ವಾಸ್ತುಶಿಲ್ಪ ಕ್ಷೇತ್ರಗಳಲ್ಲಿ ಸಂಶೋಧನೆ ಮಾಡುತ್ತಿದೆ. ಪ್ರಚಾರ, ಉಪನ್ಯಾಸ, ಸಂರಕ್ಷಣೆ ಮತ್ತು ಅವುಗಳ ಮೇಲೆ ಬೆಳಕು ಚೆಲ್ಲುವ ಕೆಲಸವನ್ನು ನಿರಂತರವಾಗಿ ಮಾಡಿಕೊಂಡು ಬರುತ್ತಿದೆ.

**ಏನಿದು ಯೋಜನೆ?**

ಸ್ಥಳೀಯ ಪ್ರದೇಶಗಳ ಚರಿತ್ರೆ ಮತ್ತು ಇತಿಹಾಸ ನಶಿಸಿ ಹೋಗುತ್ತಿರುವುದನ್ನು ತಡೆಯಲು ದೇಶದಲ್ಲೇ ಮೊದಲ ಬಾರಿಗೆ ಮಿಥಿಕ್ ಸೊಸೈಟಿ 3ಡಿ ತಂತ್ರಜ್ಞಾನದಲ್ಲಿ ಶಾಸನಗಳನ್ನು ಸಂರಕ್ಷಿಸಿ ಡಿಜಿಟಲೀಕರಣ ಕಾರ್ಯ ಮಾಡುತ್ತಿದೆ. ಇಸ್ತ್ರಿಪೆಟ್ಟಿಗೆ ಹೋಲುವ 3ಡಿ ಸ್ಕ್ಯಾನರ್ ಯಂತ್ರ ಇದೆ. ಇದರ ಬೆಲೆ 30 ಲಕ್ಷ ರೂ. ಇದೆ. ದೇವಸ್ಥಾನಗಳು, ಕೆರೆಕಟ್ಟೆಗಳು, ಜಮೀನಿನಲ್ಲಿ ಹಾಗೂ ರಸ್ತೆಗಳು ಸೇರಿ ಇನ್ನಿತರ ಕಡೆಗಳಲ್ಲಿ ಬಿದ್ದಿರುವ ಶಾಸನಗಳನ್ನು ಸ್ವಚ್ಛಗೊಳಿಸಿ 3ಡಿ ಸ್ಕ್ಯಾನಿಂಗ್ ಮಾಡಿದರೆ ಅದರಲ್ಲಿರುವ ಮಾಹಿತಿಗಳು ಪತ್ತೆಯಾಗಲಿವೆ. ಮಳೆ ಮತ್ತು ಬಿಸಿಲು ಸೇರಿ ಇನ್ನಿತರ ಕಾರಣಗಳಿಂದ ಹಾಳಾಗಿರುವ ಶಾಸನಗಳನ್ನೂ 3ಡಿ ತಂತ್ರಜ್ಞಾನ ಬಳಸಿ ಯಾವ ಕಾಲದ ಶಾಸನ ಸೇರಿ ಇನ್ನಿತರರ ಬಗ್ಗೆ ಮಾಹಿತಿ ಪಡೆಯಬಹುದು. ಇವುಗಳನ್ನು ಸಂಶೋಧನೆ ನಡೆಸಿ ಡಿಜಿಟಲೀಕರಣ ಮಾಡಲಾಗುತ್ತದೆ. ಆದರೆ, ಸರ್ಕಾರ ಈ ಯೋಜನೆಗೆ ಒಂದು ಪೈಸೆಯನ್ನೂ ಕೊಟ್ಟಿಲ್ಲ. ಮಿಥಿಕ್ ಸೊಸೈಟಿ ಸ್ವಂತ ಖರ್ಚಿನಿಂದ ಈ ಯೋಜನೆಯನ್ನು ಜಾರಿಗೆ ತಂದಿದೆ.

**500 ವರ್ಷ ಹಳೆಯ ಸಿಂಗಾಪುರ ಗ್ರಾಮ**

ಬೆಂಗಳೂರಿನ ಹೊರವಲಯದ ಸಿಂಗಾಪುರ ಗ್ರಾಮದ ಬಗ್ಗೆ ಶಾಸನ ಪತ್ತೆಯಾಗಿದೆ. ಶಾಸನಗಳಿಂದ ಮತ್ತು ದೇವಾಲಯದ ಆಧಾರದಿಂದ ಸಿಂಗಾಪುರ ಅಂದಾಜು 500 ವರ್ಷಗಳ ಪುರಾತನ ಪ್ರದೇಶವಾಗಿದೆ. ವೈಷ್ಣವರ ಪ್ರವಿತ್ರ ಧಾರ್ಮಿಕ ಕ್ಷೇತ್ರ ಇದಾಗಿದೆ. ರಾಮಾನುಜ ಕೂಟ ಸ್ಥಾಪಿಸಿ ಸಾಮಾಜಿಕ ಕಾರ್ಯಗಳನ್ನು ಮಾಡುತ್ತಿದ್ದ ಬಗ್ಗೆ ಉಲ್ಲೇಖವಾಗಿದೆ. 500 ವರ್ಷದ ಹಳೆಯ ಕೆರೆ ಇದ್ದು, ಜನರಿಗೆ, ಪಶುಪಕ್ಷಿಗಳಿಗೆ ಜೀವನಾಡಿಯಾಗಿತ್ತು. ಸಿಂಗಾಪುರವು ಐತಿಹಾಸಿಕ ಮತ್ತು ಸಾಂಸ್ಕೃತಿಕವಾಗಿ ಮಹತ್ವ ಪಡೆದಿರುವ ಪ್ರದೇಶವಾಗಿತ್ತು ಎಂಬುದನ್ನು ಶಾಸನಗಳಿಂದ ತಿಳಿದುಬಂದಿದೆ ಎಂದು ಉದಯಕುಮಾರ್ ಹೇಳಿದರು.

---

METRO on Sunday

FUTURE IN THE PAST

# A unique project that traces city's history before Kempe Gowda

Aim is to digitise 1,500 stone inscriptions and create their 3D models in three years

NIRANJAN KAGGERE
BENGALURU, DHNS

For most people, the history of Bengaluru essentially starts with Kempe Gowda, who founded the ... in the sixteen century. Although scholars and epigraphists have traced the city's history to 750 CE, few people would believe

---

# Mythic Society to preserve 175 city inscriptions in 3D

TIMES NEWS NETWORK

**Bengaluru:** In an effort to save historically significant inscriptions discovered in Bengaluru city and its suburbs over the years, Mythic Society has launched a project to scan in 3D about 175 inscriptions dating from CE 750 to the 18th century.

Announcing the project, V Nagaraj, secretary of Mythic Society, emphasised the need to save inscriptions and ensure they are available for future generations.

The project will be implemented by Udaya Kumar PL, a citizen historian who has been working on Bengaluru inscriptions for few years now. He said it is essential to utilise 3D technology to digitally scan inscriptions as almost few decades as a result of lack of awareness and rapid urbanisation.

According to Mythic Society experts, Bengaluru is a unique global city with thousands of years of history recorded in the form of inscriptions. About 175 inscriptions dating from CE 750 have been found and over 75 rare stone inscriptions have been destroyed in the past few decades. Said to be the first of its kind in India, the 3D scanning process is expected to scan all stone inscriptions discovered in Bengaluru, Bengaluru Rural and Ramanagara in

---

# ನಗರದ 175 ಶಿಲಾಶಾಸನಕ್ಕೆ ಡಿಜಿಟಲ್ ರೂಪ

## ದೇಶದಲ್ಲೇ ಮೊದಲ ಬಾರಿ 3ಡಿ ಸ್ಕ್ಯಾನ್ ಬಳಸಿ ಶಿಲಾಶಾಸನಗಳ ಸಂರಕ್ಷಣೆ: ನಾಗರಾಜ್

• **ಕನ್ನಡಪ್ರಭ ವಾರ್ತೆ** ಬೆಂಗಳೂರು

ಅಂತರಿಕ್ಷ ಯಾನ ಹಾಗೂ ರಕ್ಷಣಾ ವಲಯದಲ್ಲಿ ಬಳಸುವ ಅತ್ಯಾಧುನಿಕ ತಂತ್ರಜ್ಞಾನ ಉಪಯೋಗಿಸಿಕೊಂಡು ದೇಶದಲ್ಲೇ ಮೊದಲ ಬಾರಿಗೆ ಶಿಲಾ ಶಾಸನಗಳನ್ನು 3ಡಿ ಸ್ಕ್ಯಾನ್ ಮಾಡಿ ಸಂರಕ್ಷಣೆ ಮಾಡಲಾಗುತ್ತಿದ್ದು, ನಗರದಲ್ಲಿನ 18ನೇ ಶತಮಾನದ 175 ಶಿಲಾ ಶಾಸನಗಳ ಡಿಜಿಟಲ್ ಸಂರಕ್ಷಣೆ ಕಾರ್ಯ ಮಾಡಲಾಗಿದೆ ಎಂದು 'ದಿ ಮಿಥಿಕ್ ಸೊಸೈಟಿ' ಗೌರವ ಕಾರ್ಯದರ್ಶಿ ವಿ.ನಾಗರಾಜ್ ತಿಳಿಸಿದರು.

ಶುಕ್ರವಾರ ಸುದ್ದಿಗೋಷ್ಠಿಯಲ್ಲಿ ಮಾತನಾಡಿದ ಅವರು, ರಾಮನಗರ ಜಿಲ್ಲೆ ಹಾಗೂ ಬೆಂಗಳೂರು ಸುತ್ತಮುತ್ತಲಿನ ಸುಮಾರು 1500 ಶಾಸನಗಳಲ್ಲಿ ಶೇ.40 ರಷ್ಟು ಶಾಸನ ಹಾಳಾಗಿವೆ. ಬೆಂಗಳೂರಿನ 175 ಶಾಸನಗಳನ್ನು ಸೊಸೈಟಿಯ ಶಾಸನಗಳ ಡಿಜಿಟಲ್ ಸಂರಕ್ಷಣಾ ಯೋಜನೆಯ ತಂಡವು 3ಡಿ ಸ್ಕ್ಯಾನ್ ಮಾಡಿದೆ. ಇದಕ್ಕಾಗಿ ಹೈ ರೆಸಲ್ಯೂಶನ್ ಇರುವ 3-ಡಿ ಸ್ಕ್ಯಾನಿಂಗ್ ಕ್ಯಾಮರಾವನ್ನು ₹30 ಲಕ್ಷ ವೆಚ್ಚ ಮಾಡಿ ಅಮೆರಿಕದಿಂದ ಖರೀದಿಸಿ ತರಲಾಗಿದೆ. ಸಾವಿರಾರು ಶಾಸನಗಳ ಡಿಜಿಟಲ್ ಸಂರಕ್ಷಣೆಗಾಗಿ ಅತ್ಯಾಧುನಿಕ ಸ್ಕ್ಯಾನಿಂಗ್ ಮತ್ತು ಕಂಪ್ಯೂಟರ್ ತಂತ್ರಜ್ಞಾನ ಬಳಸಲಾಗಿದೆ ಎಂದು ವಿವರಿಸಿದರು.

**ಮಹತ್ವಾಕಾಂಕ್ಷೆಯ ಯೋಜನೆ:** ಆಧುನಿಕ ಸಂಶೋಧನಾ ವಿಧಾನಗಳಿಂದ ದೇಶದ ಇತಿಹಾಸದ ಅಧ್ಯಯನ ನಡೆಸಿದರೆ ನಿಖರ ಮಾಹಿತಿ ಹೊರಬರುತ್ತದೆ. ಈ ಜ್ಞಾನಸಂಪತ್ತನ್ನು ಸರಳವಾಗಿ ಜನಸಾಮಾನ್ಯರಿಗೆ ತಿಳಿಸುವುದು ಇಂದಿನ ಅಗತ್ಯವಾಗಿದೆ. ಇದಕ್ಕೆ ಅನುಗುಣವಾಗಿ ಯೋಜನೆಗಳನ್ನು ಮಿಥಿಕ್ ಸೊಸೈಟಿ ಕೈಗೊಳ್ಳುತ್ತಿದೆ. ರಾಜ್ಯ ಪುರಾತತ್ವ ಇಲಾಖೆಯ ಅನುಮತಿ ಪಡೆದು, ಶಾಸನಗಳ 3ಡಿ ಡಿಜಿಟಲ್ ಸ್ಕ್ಯಾನಿಂಗ್‌ನ ಮಹತ್ವಾಕಾಂಕ್ಷೆಯ ಯೋಜನೆ ಕೈಗೆತ್ತಿಕೊಳ್ಳಲಾಗಿದೆ ಎಂದು ಹೇಳಿದರು.

ತಿಳುವಳಿಕೆಯ ಕೊರತೆ, ನಿರಾಸಕ್ತಿ ಮತ್ತು ಕ್ಷಿಪ್ರ ನಗರೀಕರಣದ ಪರಿಣಾಮವಾಗಿ ಕೆಲವು ದಶಕಗಳಲ್ಲಿ ಶೇ.40ರಷ್ಟು ಶಿಲಾ ಶಾಸನಗಳು ನಾಶ ವಾಗಿವೆ ಎಂದು ವಿ.ನಾಗರಾಜ್ ವಿಷಾದಿಸಿದರು.

ಶಾಸನಗಳ 3ಡಿ ಡಿಜಿಟಲ್ ಸಂರಕ್ಷಣಾ ಯೋಜನೆ ನಿರ್ದೇಶಕ ಉದಯ ಕುಮಾರ್ ಮಾತನಾಡಿ, ಪ್ರಾಚೀನ ಇತಿಹಾಸದ ಬಗ್ಗೆ ಇನ್ನಷ್ಟು ತಿಳಿಯಲು ಸಹಾಯಕವಾಗುವಂತೆ ಕಲ್ಲಿನ ಶಾಸನಗಳನ್ನು 3-ಡಿ ಸ್ಕ್ಯಾನಿಂಗ್ ಮೂಲಕ ರಕ್ಷಣೆ ಮಾಡಲಾಗುತ್ತಿದೆ. ಓದಲು ಕಷ್ಟವಾಗುವ ಕಲ್ಲಿನ ಶಾಸನಗಳನ್ನೂ ನೂತನ ತಂತ್ರಜ್ಞಾನದಿಂದ ಓದಬಹುದಾಗಿದೆ ಎಂದು ತಿಳಿಸಿದರು.

ಯಲಹಂಕ ಬಳಿಯ ಸಿಂಗಾಪುರದ 500 ವರ್ಷದ ಐತಿಹಾಸಿಕ ಶಾಸನದ ಬಗ್ಗೆ ಮಾಹಿತಿ ನೀಡುವ ಕಿರುಹೊತ್ತಿಗೆಯನ್ನು ಬಿಡುಗಡೆಗೊಳಿಸಲಾಯಿತು.



ಶಿಲಾಶಾಸನದ ಬಗ್ಗೆ ಮಿಥಿಕ್ ಸೊಸೈಟಿ ಗೌರವ ಕಾರ್ಯದರ್ಶಿ ವಿ.ನಾಗರಾಜ್, ಉದಯಕುಮಾರ್ ವಿವರಣೆ.

---

SPOTLIGHT

# Rerecording history

A local history buff in Bengaluru finds technological solutions to preserve 1,000-year-old stone inscriptions for posterity.

BY **VIKHAR AHMED SAYEED**

FOR 54-year-old P.L. Udaya Kumar, fieldwork means locating ancient stone inscriptions and scanning and deciphering them. This is what Udaya Kumar, who heads the Bengaluru-based Inscriptions 3D Digital Conservation Project, set out to do on a Saturday morning in early February. Udaya Kumar was informed by a contact residing in Chikkabanavara on the northern outskirts of Bengaluru that he had discovered two stone inscriptions in a eucalyptus grove. Udaya Kumar reached the spot along with two young researchers, R. Yuvaraju and M.N. Madhusudhan, who are part of the inscriptions project.

They excavated the two stone slabs that were lying half buried. The slabs, both one foot wide and one of them 5 ft long and the other 8 ft long, were taken to a vacant land lying between a warehouse for tiles and a solar heater manufacturing unit. *Frontline* found Udaya Kumar at that spot holding a purple bed sheet over a granite stone. It was mid-morning. Making use of the impromptu shade, Yuvaraju began scanning the stone inscription with a device that looked like a laundry iron. He slowly moved the three-dimensional scanner equipped with five cameras over the entire surface of the stone.

Before scanning the inscriptions, Udaya Kumar and his team pressed *maida* (all-purpose flour) on the stones. This revealed the script, making it possible to do a primary epigraphical analysis of the contents and the period on the basis of the evolutionary style of the script. This was corroborated when a rudimentary 3D image emerged, layer by layer, on a laptop computer. The inscriptions, which appeared enigmatic moments before, were now as clear as printed text. The script could be easily deciphered. Anyone with knowledge of old Kannada and Tamil scripts would be able to read the inscriptions with ease. By deciphering the inscriptions, Udaya Kumar and his team have added another layer of history in the local palimpsest of Chikkabanavara.

Udaya Kumar explained: "Looking at the inscriptions, I think the smaller stone dates back to the 10th century and is in *Halegannada* [old Kannada] while the longer one, which has Tamil characters inscribed on it, dates back to the 14th century."

To the gaze of an inexperienced person, the granite stones looked inscrutable and did not reveal their significance in any way, but to the experienced scrutiny of Udaya Kumar, the stones gave away their secrets willingly.

The genesis of the 3D inscriptions project can be traced to 2017 when Udaya Kumar began his quest to rediscover stone inscriptions that


PHOTOGRAPHS: BY SPECIAL ARRANGEMENT

P.L. UDAYA KUMAR, director, Inscriptions 3D Digital Conservation Project, with a replica of the 10th century Begur Buttanapathi 'veeragallu', or hero stone. On the fourth line is the first written record of the name Bengaluru in 10th century Kannada characters.